ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ವಿಶ್ವವಿದ್ಯಾನಿಲಯಗಳಲ್ಲಿ ಅಕ್ರಮವಾಗಿ ಪದೋನ್ನತಿ ನೀಡುತ್ತಿರುವ ಬಗ್ಗೆ

ಶ್ರೀ ಕೆ. ಗೋವಿಂದರಾಜ್(ವಿಧಾನಸಭೆಯಿಂದ ಚುನಾಯಿತರಾದವರು) –

10 (129) ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿರುವ ವಿಶ್ವವಿದ್ಯಾನಿಲಯಗಳಲ್ಲಿ ಸಹಾಯಕ ಕುಲಸಚಿವರಿಂದ ಉಪ-ಕುಲಸಚಿವರು ಮತ್ತು ಇತರ ಹುದ್ದೆಗಳಿಗೆ ಪದೋನ್ನತಿ ನೀಡುವಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು; (ನಿಯಮಾವಳಿಗಳ ಮಾಹಿತಿ ಒದಗಿಸುವುದು)

(ಆ) ವಿಶ್ವವಿದ್ಯಾನಿಲಯಗಳಲ್ಲಿ ಪದೋನ್ನತಿ ನೀಡುವಲ್ಲಿ ನಿಯಮಾವಳಿ ಅನುಸರಿಸದಿರುವುದು, ನಿಯಮ ಉಲ್ಲಂಘನೆಯಂತಹ ಪ್ರಕರಣಗಳಿಂದ ಭ್ರಷ್ಟಾಚಾರ ಹೆಚ್ಚುತ್ತಿರುವ ಅಂಶವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸುತ್ತಿದೆಯೇ; ಹಾಗಿದ್ದಲ್ಲಿ, ಇದುವರೆಗಿನ ಸರ್ಕಾರದ ಕ್ರಮಗಳೇನು; (ಮಾಹಿತಿ ಒದಗಿಸುವುದು)

(ಇ) ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾನಿಲಯವು ಸಿಂಡಿಕೇಟ್ ಅನುಮೋದನೆ ಪಡೆದು ಸಹಾಯಕ ಕುಲಸಚಿವ ಹುದ್ದೆಯಿಂದ ಉಪ-ಕುಲಸಚಿವ ಹುದ್ದೆಗೆ ಪದೋನ್ನತಿ ನೀಡುವಲ್ಲಿ ನಿಯಮ ಉಲ್ಲಂಘನೆ, ವ್ಯಾಪಕ ಭ್ರಷ್ಟಾಚಾರ ಆಗಿರುವುದನ್ನು ಸರ್ಕಾರ ಗಮನಿಸಿದೆಯೇ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ಒದಗಿಸುವುದು)

(ಈ) ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ನಡೆದಿರುವ ಅಕ್ರಮ ಪದೋನ್ನತಿ ವಿಷಯವಾಗಿ ಮಹಾಲೇಖಪಾಲರು ಸಹ ಲೆಕ್ಕ ಪರಿಶೋಧನಾ ಸಮಯದಲ್ಲಿ ನಮೂದಿಸಿರುವ ಅಂಶವನ್ನು ಸರ್ಕಾರ ಗಂಭೀರವಾಗಿ, ಪರಿಗಣಿಸಿದೆಯೇ; ಈ ಅಕ್ರಮದಲ್ಲಿ ಭಾಗಿಯಾಗಿರುವವರ ವಿರುದ್ಧ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು)